# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎನ್.ಎಸ್ ಬೋಸ್‌ರಾಜು
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 750
ಉತ್ತರಿಸಬೇಕಾದ ದಿನಾಂಕ : 10.03.2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಆರ್.ಎ.ಪಿ.ಸಿ.ಎಂ.ಎಸ್, ಮಾನ್ವಿ ಮತ್ತು ಸಿಂಧನೂರು ತಾಲ್ಲೂಕು ಸಹಕಾರ ಸಂಘಗಳ ಪರಿಸ್ಥಿತಿ ಸುಧಾರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಈ ಸಹಕಾರ ಸಂಘಗಳಿಗೆ ಇರುವ ಆಸ್ತಿ ರಕ್ಷಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | 1) ರಾಯಚೂರು ಆರ್‌ಎಪಿಸಿಎಂಎಸ್ ಸಂಘದ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸರ್ಕಾರವು ರೂ.48.26 ಲಕ್ಷ ಶೇರು ಬಂಡವಾಳ, ರೂ 1.00 ಲಕ್ಷ ಬಿ.ಡಿ.ಪಿ. ಸಹಾಯಧನ ಮತ್ತು ರೂ.5.00 ಲಕ್ಷ ಗೋದಾಮುಗಳ ರಿಪೇರಿಗಳಿಗೆ ಸಹಾಯಧನ ಮಂಜೂರು ಮಾಡಲಾಗಿದೆ.<br><br>ರಾಯಚೂರು ನಗರದ ಹೈದ್ರಾಬಾದ್ ರಸ್ತೆಯಲ್ಲಿ ಸಂಘವು 36 ಎಕರೆ ಭೂಮಿ ಹೊಂದಿರುತ್ತದೆ. ಈ ಭೂಮಿಯಲ್ಲಿ ಸಂಘವು 29 ಗೋದಾಮಗಳು, ಅಕ್ಕಿ ಗಿರಣಿ, ಅರಳೆ ಜಿನ್ನಿಂಗ ಘಟಕ, ವ್ಹೇ ಬ್ರಿಡ್ಜ ಇರುತ್ತದೆ. ಎ.ಪಿ.ಎಂ.ಸಿ ಯಾರ್ಡ್‌ನಲ್ಲಿ ಎರಡು ಮಳಿಗೆಗಳು, 3 ಗೋದಾಮುಗಳು ಹಾಗೂ ರಾಯಚೂರು ತಾಲ್ಲೂಕಿನ ಗ್ರಾಮೀಣ ಭಾಗದಲ್ಲಿ 3 ಗೋದಾಮುಗಳನ್ನು ಹೊಂದಿದ್ದು, ಇವುಗಳ ಒಟ್ಟು ಸಾಮರ್ಥ್ಯವು ಸುಮಾರು 20,000 ಮೆ/ಟನ್ ಇರುತ್ತದೆ. ಇವುಗಳು ಸಂಘದ ಸ್ವಾಧೀನದಲ್ಲಿ ಇರುತ್ತವೆ.<br><br>**2)** ಮಾನ್ವಿ ಟಿ.ಎ.ಪಿ.ಸಿ.ಎಂ.ಎಸ್.ಲಿ, ಈ ಸಂಘದ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸರ್ಕಾರ ರೂ.3.52 ಲಕ್ಷ ಸಹಾಯಧನ ಹಾಗೂ 5.92 ಲಕ್ಷ ಸರ್ಕಾರದ ಷೇರು ಬಂಡವಾಳ ಮಂಜೂರು ಮಾಡಿರುತ್ತದೆ.<br><br>ಸಂಘವು ಮಾನ್ವಿಯಲ್ಲಿ ಸರ್ವೆ ನಂಬರ 467/ಅ ರಲ್ಲಿ ಹೊಂದಿರುವ 3 ಎಕರೆ 10 ಗುಂಟೆ ಭೂಮಿಯಲ್ಲಿ 27 ಮಳಿಗೆ ಮತ್ತು 08 ಗೋದಾಮುಗಳನ್ನು ಹಾಗೂ ಸಂಘದ ಕಾರ್ಯಾಲಯದ ಕಟ್ಟಡ ಹೊಂದಿರುತ್ತದೆ. ಸರ್ವೆ ನಂಬರ 6/1, 6/2, ಹಾಗೂ 14 ಮತ್ತು 13/1 ಸರ್ವೆ ನಂಬರುಗಳಲ್ಲಿ ಹೊಂದಿರುವ 9 ಎಕರೆ 20 ಗುಂಟೆ ಭೂಮಿಯಲ್ಲಿ 06 ಗೋದಾಮು ಹಾಗೂ ಬಯಲು ಜಾಗವನ್ನು ಹೊಂದಿರುತ್ತದೆ. ಸದರಿ ಜಾಗವು ಸಂಘದ ಸ್ವಾದೀನದಲ್ಲಿರುತ್ತದೆ.<br><br>**3)**ಸಿಂಧನೂರು ಟಿಎಪಿಸಿಎಂಎಸ್ ಸಂಘದ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸರ್ಕಾರ ರೂ. 32.00 ಲಕ್ಷ ಸಹಾಯಧನ ಮಂಜೂರು ಮಾಡಿರುತ್ತದೆ.<br><br>ಸಂಘವು ಸಿಂಧನೂರಿನಲ್ಲಿ ಒಟ್ಟು 9 ಎಕರೆ 35 ಗುಂಟೆ ಜಾಗ ಹೊಂದಿದ್ದು, ಇದರಲ್ಲಿ 11 ಗೋದಾಮು ಹಾಗೂ 01 ಕಾರ್ಯಾಲಯ ನಿರ್ಮಾಣ ಮಾಡಿದ್ದು, ಇವುಗಳು ಸಂಘದ ಸ್ವಾಧೀನದಲ್ಲಿರುತ್ತವೆ. |
| ಆ) | ರಾಯಚೂರು ಜಿಲ್ಲೆಯಲ್ಲಿರುವ ಪಿಎಲ್‌ಡಿ ಬ್ಯಾಂಕುಗಳ ಪರಿಸ್ಥಿತಿ ಸುಧಾರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | 1. ರಾಯಚೂರು ಜಿಲ್ಲೆಯ ಪಿಕಾರ್ಡ್ ಬ್ಯಾಂಕುಗಳಲ್ಲಿ ಸರ್ಕಾರವು ರೂ.9.07 ಲಕ್ಷಗಳ ಷೇರು ಬಂಡವಾಳವನ್ನು ತೊಡಗಿಸಿರುತ್ತದೆ.<br>2. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರ ಸಾಲ ಮನ್ನಾ ಯೋಜನೆಯಡಿ ರಾಯಚೂರು ಜಿಲ್ಲೆಯ ಪಿಕಾರ್ಡ್ ಬ್ಯಾಂಕುಗಳ 3418 ಸದಸ್ಯರ ರೂ. 704.56 ಲಕ್ಷ ಮೊತ್ತವನ್ನು ಸರ್ಕಾರ ಮನ್ನಾ ಮಾಡಿರುತ್ತದೆ.<br>3. ಸರ್ಕಾರವು ವಿಫಲ ತೋಡುಬಾವಿ ಮತ್ತು ಕೊಳವೆಬಾವಿ ಯೋಜನೆಯಡಿ ರಾಯಚೂರು ಜಿಲ್ಲೆಯ ಪಿಕಾರ್ಡ್ ಬ್ಯಾಂಕುಗಳ 233 ಸದಸ್ಯರ ಒಟ್ಟು ರೂ. 120.00 ಲಕ್ಷ ಮನ್ನಾ ಮಾಡಲಾಗಿದೆ.<br>4. ಸರ್ಕಾರದ ಬಡ್ಡಿ ಮನ್ನಾ ಯೋಜನೆಯಡಿ, ರಾಯಚೂರು ಜಿಲ್ಲೆಯ ಪಿಕಾರ್ಡ್ ಬ್ಯಾಂಕುಗಳ 406 ಸದಸ್ಯರ ಒಟ್ಟು ರೂ.150.45 ಲಕ್ಷ ಬಡ್ಡಿ ಮನ್ನಾ ಮಾಡಲಾಗಿದೆ. |

<table>
<tr><td></td><td></td><td>5. ಸರ್ಕಾರವು ಕಳೆದ 05 ವರ್ಷಗಳಲ್ಲಿ ಬಡ್ಡಿ ರಿಯಾಯಿತಿ ಯೋಜನೆಯಡಿ, ರಾಯಚೂರು ಜಿಲ್ಲೆ ಪಿಕಾರ್ಡ್ ಬ್ಯಾಂಕುಗಳಿಗೆ ಒಟ್ಟು ರೂ.336.20 ಲಕ್ಷ ಬಡ್ಡಿ ಸಹಾಯಧನವನ್ನು ನೀಡಲಾಗಿದೆ.</td></tr>
<tr><td>ಇ)</td><td>ರಾಯಚೂರು ಮತ್ತು ಮಾನ್ವಿ ತಾಲೂಕುಗಳ ಪಿ.ಎಲ್.ಡಿ ಬ್ಯಾಂಕುಗಳಿಗೆ ಎಸ್.ಎಲ್.ಡಿ.ಬಿ ಬ್ಯಾಂಕಿನಿಂದ ಮಂಜೂರಾಗಿರುವ ಅನುದಾನ ಎಷ್ಟು?</td><td>ರಾಯಚೂರು ಜಿಲ್ಲೆಯ ರಾಯಚೂರು ಮತ್ತು ಮಾನ್ವಿ ತಾಲ್ಲೂಕುಗಳ ಪಿಸಿಎಆರ್‌ಡಿ ಬ್ಯಾಂಕುಗಳಿಗೆ ಎಸ್‌ಎಲ್‌ಡಿಬಿ ಬ್ಯಾಂಕಿನಿಂದ ರೈತರ ಸಾಲ ವಿತರಣೆಗಾಗಿ ಈ ಕೆಳಕಂಡಂತೆ ಅನುದಾನ ಮಂಜೂರು ಮಾಡಲಾಗಿದೆ.<br>(ರೂ.ಲಕ್ಷಗಳಲ್ಲಿ
<table>
<tr><th>ಬ್ಯಾಂಕಿನ ಹೆಸರು</th><th>2015–16</th><th>2016–17</th><th>2017–18</th><th>2018–19</th><th>2019–20</th></tr>
<tr><td>ಮಾನ್ವಿ ಪಿಕಾರ್ಡ್ ಬ್ಯಾಂಕ್</td><td>45.70</td><td>31.00</td><td>44.73</td><td>5.00</td><td>26.80</td></tr>
<tr><td>ರಾಯಚೂರು ಪಿಕಾರ್ಡ್ ಬ್ಯಾಂಕ್</td><td>27.04</td><td>31.50</td><td>10.64</td><td>1.56</td><td>27.10</td></tr>
</table>
</td></tr>
</table>

**ಸಂಖ್ಯೆ: ಸಿಒ 109 ಸಿಎಲ್‌ಎಸ್ 2020**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು